


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1370(1620)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು )

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಮೈಸೂರು ರಸ್ತೆ ಮತ್ತು ವಳಗೇರಹಳ್ಳಿ/ದುಬಾಸಿ ಪಾಳ್ಯ ಸಂಪರ್ಕ ಸಾಧಿಸುವ ರಸ್ತೆಯ ಕುರಿತು

(ಅ) ಬೆಂಗಳೂರು ಮಹಾನಗರದ ಮೈಸೂರು ರಸ್ತೆ ಮತ್ತು ವಳಗೇರಹಳ್ಳಿ /ದುಬಾಸಿ ಪಾಳ್ಯ ಸಂಪರ್ಕ ಸಾಧಿಸುವ ರಸ್ತೆಯಲ್ಲಿ ರೈಲು ಕ್ರಾಸಿಂಗ್‌ನಲ್ಲಿ ಸಾರ್ವಜನಿಕರ ಸುರಕ್ಷಿತ ಮುಕ್ತ ವಾಹನ ಸಂಚಾರಕ್ಕಾಗಿ ರೈಲು ಮೇಲು ಸೇತುವೆ (RUB) ಅಥವಾ ರೈಲು ಕೆಳ ಸೇತುವೆ (ROB) ನಿರ್ಮಾಣ ಮಾಡಲು ಉದ್ದೇಶಿಸಿ ತದನಂತರ ಬಿ.ಬಿ.ಎಂ.ಪಿ., ಹಿಂದೆ ಸರಿಯಲು ಇರುವ ಕಾರಣಗಳೇನು; (ವಿವರ ನೀಡುವುದು)

(ಆ) ದೈನಂದಿನವಾಗಿ ಸದರಿ ರೈಲು ಕ್ರಾಸಿಂಗ್‌ನಲ್ಲಿ ಕಿಲೋಮೀಟರ್‌ಗಟ್ಟಲೆ ವಾಹನಗಳ ಸಂಚಾರದಟ್ಟಣೆ ಉಂಟಾಗಿ ಸಾರ್ವಹನಿಕರಿಗೆ ಮತ್ತು ಸ್ಥಳೀಯರಿಗೆ ಕಿರಿಕಿರಿಯಾಗುತ್ತಿರುವ ವಿಷಯ ಕುರಿತು ಸರ್ಕಾರದ ಕ್ರಮವೇನು; (ವಿವರ ನೀಡುವುದು)

(ಇ) ಸದರಿ ರೈಲು ಕ್ರಾಸಿಂಗ್‌ನಲ್ಲಿ ಸುರಕ್ಷಿತ ಸಾರ್ವಜನಿಕ ಸಂಚಾರಕ್ಕಾಗಿ ರೈಲು ಮೇಲು ಸೇತುವೆ (RUB) ಅಥವಾ ರೈಲು ಕೆಳ ಸೇತುವೆ (ROB) ನಿರ್ಮಾಣ ಮಾಡಲು ಭಾರತೀಯ ರೈಲು ನಿಗಮದೊಡನೆ ಯಾವುದಾದರೂ ಒಪ್ಪಂದ ಅಥವಾ ಒಡಂಬಡಿಕೆ ಏರ್ಪಟ್ಟಿದೆಯೇ; ಒಪ್ಪಂದವಾಗಿದ್ದಲ್ಲಿ ಯಾವ ಕಾಲಮಿತಿಯಲ್ಲಿ ರೈಲು ಮೇಲು ಸೇತುವೆ (RUB) ಅಥವಾ ರೈಲು ಕೆಳ ಸೇತುವೆ (ROB) ನಿರ್ಮಾಣ ಮಾಡಲು ಸರ್ಕಾರ ಚಿಂತಿಸಿದೆ? (ವಿವರ ನೀಡುವುದು)